ಎಸ್. ವೈ. ಸೋಮಶೇಖರ *

# ಚಿತ್ರದುರ್ಗ ತಾಲ್ಲೂಕು ಚಿಪ್ಪಿನಕೆರೆಯಲ್ಲಿ ಕಂಡುಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು

ಚಿತ್ರದುರ್ಗ ತಾಲ್ಲೂಕಿನಲ್ಲಿರುವ ಚಿಪ್ಪಿನಕೆರೆಯು ತುರುವನೂರು ಹೋಬಳಿಗೆ ಸೇರಿದ ಗ್ರಾಮ. ಈ ಗ್ರಾಮದ ಪೂರ್ವ ದಿಕ್ಕಿಗೆ ಸುಮಾರು ಒಂದು ಕಿಲೋಮೀಟರು ದೂರದ ಮೂರನೇ ಸರ್ವೇ ನಂಬರಿನ ಹೊಲದಲ್ಲಿ ಪ್ರಾಕ್ಚಾರಿತ್ರಿಕ ಕಾಲದ ಕುರುಹುಗಳಾದ ವಿವಿಧ ಮಡಕೆಗಳು, ಕಬ್ಬಿಣದ ಬಳೆ, ಮಣಿಗಳು, ಎಲುಬಿನ ಅವಶೇಷಗಳು ಹಾಗೂ ಇಟ್ಟಿಗೆಯ ಚೂರುಗಳು ಕಂಡು ಬಂದಿವೆ. ಈ ವಸ್ತುಗಳು ದೊರೆತ ಸ್ಥಳವು ಜನಗಿಹಳ್ಳಿ ಮತ್ತು ಚಿಪ್ಪಿನಕೆರೆಯ ಕಡೆಯಿಂದ ಹರಿಯುವ ಕೋಡಿಹಳ್ಳಗಳ ಸಂಗಮ ಸ್ಥಾನದಲ್ಲಿದೆ. ಹದಿನೈದು ಎಕರೆಗಳಷ್ಟು ಪ್ರದೇಶದಲ್ಲಿರುವ ಈ ನೆಲೆಯು ಹಳ್ಳಗಳ ಮಟ್ಟದಿಂದ ಹದಿನೈದು-ಇಪ್ಪತ್ತು ಅಡಿಗಳಷ್ಟು ಎತ್ತರದಲ್ಲಿದೆ. ಈ ಪ್ರದೇಶವು ಎರಡು ಹಳ್ಳಗಳು ಕೂಡುವ ಸ್ಥಳವೂ, ಫಲವತ್ತಾಗಿರುವ ಭೂಮಿ ಮತ್ತು ನೀರಿನ ಉತ್ತಮ ಸೌಕರ್ಯಗಳನ್ನು ಹೊಂದಿರುವುದಾಗಿದೆ. ಒಟ್ಟಿನಲ್ಲಿ ಉತ್ತಮ ವಾತಾವರಣ ಹೊಂದಿದ್ದು, ಜನರು ವಾಸಿಸಲು ಅನುವಾಗುವ ಕನಿಷ್ಠ ಸೌಲಭ್ಯಗಳೆಲ್ಲವೂ ಇರುವುದನ್ನು ಇಲ್ಲಿ ಕಾಣಬಹುದು.

ಈ ಸ್ಥಳದಲ್ಲಿರುವ ಬೂದು ಬಣ್ಣದ ಮಣ್ಣಿನಿಂದ ಗ್ರಾಮದ ಜನರು ಬೂದಿನ ಹೊಲ, ಬೂದುಗಡ್ಡೆ ಎಂಬುದಾಗಿ ಕರೆಯುತ್ತಾರೆ. ಸ್ಥಳೀಯರ ಪ್ರಕಾರ ಇಲ್ಲಿ ಪಾಂಡವರು ವಾಸವಾಗಿದ್ದರೆಂಬುದು ತಿಳಿದುಬರುವ ಅಂಶ.

ಇಲ್ಲಿ ಕಂಡು ಬಂದಿರುವ ಅವಶೇಷಗಳೆಂದರೆ : ೧) ಕಪ್ಪು ಮತ್ತು ಕೆಂಪು ಬಣ್ಣದ ಮಡಕೆಗಳು, ೨) ಕಪ್ಪು ಮಡಕೆಗಳು, ೩) ಕೆಂಪು ಮಡಕೆಗಳು, ೪) ಕಪ್ಪು ಮತ್ತು ಕೆಂಪು ಮಡಕೆಗಳ ಮೇಲೆ ಬಿಳಿ ಬಣ್ಣದಿಂದ ಮೂಡಿಸಿರುವ ರೇಖಾಚಿತ್ರಗಳು, ಎಲೆಬಳ್ಳಿ, ಸೂರ್ಯ, ಮತ್ತಿತರ ಅಲಂಕರಣ ಹೊಂದಿದವುಗಳು, ೫) ದವಸಧಾನ್ಯ ಮತ್ತು ನೀರು ಸಂಗ್ರಹಿಸಲು ಬಳಸುತ್ತಿದ್ದ ಜಾಡಿಯ ಚೂರುಗಳು, ೬) ವಿವಿಧ ಹರಳು, ಬೆಣಚು ಕಲ್ಲುಗಳಿಂದ ಮಾಡಿದ ಅಗೇಟ್, ಕಾರ್ನೇಲಿಯನ್ ಮಣಿಗಳು, ಸುಟ್ಟ ಮಣ್ಣಿನ ಮಣಿಗಳು ಹಾಗೂ ೮) ಕಬ್ಬಿಣದ ಬಳೆ ಮತ್ತು ಚೂರುಗಳು, ಇವೇ ಮುಂತಾದ ವಸ್ತುಗಳನ್ನು ಕಾಣಬಹುದು. ಈ ಪ್ರದೇಶವು ನೂರಾರು ವರ್ಷಗಳಿಂದ ಕೃಷಿಗೆ ಒಳಪಟ್ಟಿರುವುದರಿಂದ ನೆಲೆಗೆ ತುಂಬಾ ಹಾನಿಯಾಗಿದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ಜನಗಿಹಳ್ಳವೆಂದು ಹೆಸರು ಪಡೆದಿರುವ ಈ ಹಳ್ಳವು ಮುಂದೆ ಹರಿಯುತ್ತಾ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಚಿನ್ನಹಗರಿ (ಚಿಕ್ಕಹಗರಿ) ನದಿಯಾಗಿ ರೂಪ ಹೊಂದಿರುವುದು ಗಮನಾರ್ಹ. ಈ ಚಿನ್ನಹಗರಿ ನದಿಯ ದಂಡೆಯ ಮೇಲೆಯೇ ಕರ್ನಾಟಕದ ಪ್ರಮುಖ ಪ್ರಾಕ್ಚಾರಿತ್ರಿಕ ನೆಲೆಯಾದ ಬ್ರಹ್ಮಗಿರಿ ಇದ್ದು ಇದರ ಜೊತೆಗೆ ಚಿತ್ರದುರ್ಗದ ಬಳಿಯ ಚಂದ್ರವಳ್ಳಿ ಮತ್ತು ತಮ್ಮಟಕಲ್ಲುಗಳು ಈ ನೆಲೆಗೆ ಹದಿನೈದು ಮತ್ತು ಹತ್ತು ಮೈಲುಗಳ ಅಂತರದಲ್ಲಿವೆ.

ಎಂ. ಹೆಚ್. ಕೃಷ್ಣ ಮತ್ತು ಮಾರ್ಟಿಮರ್ ವ್ಹೀಲರ್‌ರು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ನಡೆಸಿದ ಉತ್ಖನನದಿಂದ ದೊರೆತ ಅವಶೇಷಗಳಿಗೆ ಸಮಾನವಾದ ಮಡಕೆಗಳು ಮತ್ತು ಮಣಿಗಳು ಇಲ್ಲಿಯೂ ದೊರೆತಿರುವುದರಿಂದ ಈ ನಾಲ್ಕು ನೆಲೆಗಳಿಗೂ ಸಂಬಂಧವನ್ನು ಕಲ್ಪಿಸಬಹುದಾಗಿದೆ.

* ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ-೫೮೩ ೨೭೧.

ಇಲ್ಲಿ ದೊರೆತ ವಸ್ತುಗಳ ಆಧಾರದ ಮೇಲೆ ಈ ಪ್ರದೇಶವು ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗ ಮತ್ತು ಪ್ರಾರಂಭದ ಚಾರಿತ್ರಿಕಯುಗ ಅಥವಾ ಶಾತವಾಹನರ ಕಾಲಕ್ಕೆ ಸೇರಿದ ನೆಲೆಯಾಗಿದ್ದುದು ತಿಳಿದುಬರುವ ಅಂಶ. ಈ ನೆಲೆಯ ಒಂದು ಭಾಗದಲ್ಲಿ ಅಗೆದಾಗ ಮೂರೂವರೆ ಅಡಿಗಳವರೆಗೆ ಹಾಳು ಮಣ್ಣು ಕಂಡುಬಂದಿದ್ದು, ಅದರ ಕೆಳಗೆ ಗಟ್ಟಿಯಾದ ಕೆಂಪು ಮಣ್ಣು ಅಂದರೆ ಸ್ವಾಭಾವಿಕ ಸ್ತರವಿದೆ. ಅಗೆದ ಭಾಗದಲ್ಲಿ ಚಾರಿತ್ರಿಕ ಯುಗದ ಮಡಕೆಗಳು ಒಂದು ಸ್ತರದಲ್ಲಿದ್ದು, ಅದರ ಕೆಳಭಾಗದಲ್ಲಿ ಬೃಹತ್ ಶಿಲಾಯುಗದ ಕಪ್ಪು ಮತ್ತು ಕೆಂಪು ಬಣ್ಣದ ಮಡಕೆಗಳು, ಕಬ್ಬಿಣದ ಬಳೆ, ಎಲುಬಿನ ಚೂರುಗಳು ಸಿಕ್ಕಿವೆ. ಇವುಗಳ ಜೊತೆಗೆ ಕೃಷಿ ಮಾಡುವಾಗ ಮಡಕೆಗಳು, ಜಾಡಿಗಳು, ಮಣಿಗಳು ಸಿಕ್ಕಿದ್ದವೆಂದು ಹೊಲದ ಯಜಮಾನರು ಹೇಳುತ್ತಾರೆ. ಇವುಗಳಿಂದ ಈ ನೆಲೆಯು ಬೃಹತ್ ಶಿಲಾಯುಗ ಮತ್ತು ಶಾತವಾಹನ ಯುಗಗಳಿಗೆ ಸೇರಿದ್ದಿತೆಂಬುದು ನನ್ನ ಅಭಿಪ್ರಾಯ. ಈ ಬಗೆಗೆ ಹೆಚ್ಚಿನ ಸಂಶೋಧನಾ ಕಾರ್ಯ ನಡೆಯಬೇಕಿದ್ದು, ಅಂತಿಮ ತೀರ್ಮಾನಕ್ಕೆ ವಿದ್ವಾಂಸರ ಗಮನಕ್ಕೆ ತರುತ್ತಿದ್ದೇನೆ.

ಚಿಪ್ಪಿನಕೆರೆಯಲ್ಲಿ ದೊರೆತ ಪ್ರಾಚೀನ ಅವಶೇಷಗಳು ಒಂದೆಡೆಯಾದರೆ, ಗ್ರಾಮದ ಹೆಸರಾದ 'ಚಿಪ್ಪಿನಕೆರೆ' ಎಂಬ ಪದವನ್ನು ಸೂಚಿಸುವ ವಿಜಯನಗರದ ನಂತರ ಕಾಲದ ಶಾಸನವೊಂದು ಸಿಕ್ಕಿದೆ. ಇದರಲ್ಲಿ ಬರುವ ವಿಷಯ ''ಚಿಪ್ಪಿನಕೆರೆ ರುದ್ರಪ್ಪ ಗಿರಿಯಣಗೆ ಕೊಟ್ಟ ಹೊಲ'' ಎಂದಿದೆ.

(ಪ್ರಸ್ತುತ ಅಧ್ಯಯನಕ್ಕೆ ಸಹಕರಿಸಿ ಸಲಹೆ-ಸೂಚನೆಗಳನ್ನಿತ್ತ ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಲಕ್ಷ್ಮಣ್ ತೆಲಗಾವಿ, ಕೆ. ಎಂ. ಸುರೇಶ್ ಹಾಗೂ ಪುರಾತತ್ವ ವಿಭಾಗದ ಎಲ್ಲ ಮಿತ್ರರಿಗೂ, ಚಿಪ್ಪಿನಕೆರೆಯ ಗ್ರಾಮಸ್ಥರಿಗೂ ಹಾಗೂ ಸಹೋದರ ರಮೇಶನಿಗೂ ಧನ್ಯವಾದಗಳನ್ನು ಹೇಳಲು ಇಚ್ಛಿಸುತ್ತೇನೆ.)

○

## ಆಕರ ಗ್ರಂಥಗಳು

Annual Report of the Mysore Archaeological Department for the Year 1942, 1943 Mysore
Ancient India : Bulletin of Archaeological Survey of India, November 4, July 1947-Jan 1948.
ಸುಂದರ ಅ., ೧೯೭೩, ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ, ಬೆಂಗಳೂರು, ಐಬಿಹೆಚ್ ಪ್ರಕಾಶನ